**ಶಿಕ್ಷಣದ ಹಕ್ಕು**

**ನಾವು ಸರಿಯಾದ ಹಾದಿಯಲ್ಲಿದ್ದೆವೆಯೇ?**

- ದಿಶಾ ನವಾನಿ

ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡುವ ಬಹು ನಿರೀಕ್ಷಿತ -ಶಿಕ್ಷಣ ಹಕ್ಕು ಕಾಯ್ದೆ- ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕ 63 ವರುಷಗಳ ನಂತರ ಜಾರಿಗೆ ಬಂದಿತು. ಈ ಹಕ್ಕು, ಮಕ್ಕಳ ಜೀವನದ ಗುಣಮಟ್ಟ ಮತ್ತು ಘನತೆಯನ್ನು ಖಾತ್ರಿಪಡಿಸುವ ಹಕ್ಕಿನ ಅವಿಭಾಜ್ಯ ಅಂಗವಾಗಿದ್ದರೂ, ಗೋಪಾಲ ಕೃಷ್ಣ ಗೋಖಲೆಯವರ ಒತ್ತಾಯದ ಹೊರತಾಗಿಯೂ, ಸಂವಿಧಾನವು ನೀಡಿದ ಮೂಲಭೂತ ಹಕ್ಕುಗಳ ಅಡಿಯಲ್ಲಿ ಇದನ್ನು ಸೇರಿಸಲಾಗಿಲ್ಲ. 14 ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಶಿಕ್ಷಣವನ್ನು ಒದಗಿಸುವ ಗುರಿಯನ್ನು 10 ವರ್ಷಗಳ ಕಾಲಮಿತಿಯೊಳಗೆ ಸಾಧಿಸುವ ಗುರಿಯನ್ನು ನ್ಯಾಯಾಧಿಕಾರಕ್ಕೆ ಒಳಪಡದ ನಿರ್ದೇಶಕ ತತ್ವಗಳ 45ನೇ ಕಲಮಿನಲ್ಲಿ ಸೇರಿಸಲಾಗಿದೆ. ನಿರ್ದೇಶಕ ತತ್ವಗಳಿಗೆ ಕಾನೂನು ರಕ್ಷಣೆ ಇಲ್ಲದ ಕಾರಣ, ದಂಡನೆಯ ಭಯವಿಲ್ಲದೆ ಸಮಯವನ್ನು ತಳ್ಳುತ್ತ ಸಾಗಿ ಕೊನೆಗೆ 2002ರಲ್ಲಿ ಸಂಸತ್ತು ಸಂವಿಧಾನದ 86ನೇ ತಿದ್ದುಪಡಿಯನ್ನು ಅಂಗೀಕರಿಸಿತು. ಶಿಕ್ಷಣದ ಹಕ್ಕನ್ನು 6 ರಿಂದ 14 ವರುಷದ ಒಳಗಿನ ಪ್ರತಿ ಮಗುವಿನ ಮೂಲಭೂತ ಹಕ್ಕನ್ನಾಗಿ ಮಾಡಲಾಯಿತು. ವಾಸ್ತವವಾಗಿ ಶಿಕ್ಷಣದ ಹಕ್ಕನ್ನು (RTE) ಆರ್ಟಿಕಲ್ 21ನೇ ಕಲಮನ್ನು ವಿಸ್ತರಿಸಿ 21ಎ ಕಲಮು ರೂಪಿಸುವ ಮೂಲಕ ಬದುಕುವ ಹಕ್ಕಿಗೆ ಸಮಾನವಾಗಿ ಪರಿಗಣಿಸಲಾಗಿದೆ. 2009 ರಲ್ಲಿ RTE ಆಕ್ಟ್ ಅನುಮೋದನೆ ಪಡೆದು ಏಪ್ರಿಲ್ 1, 2010 ಕ್ಕೆ ಜಾರಿಗೆ ಬರುವ ಮೂಲಕ ಈ ಮೊದಲಿನ ವ್ಯವಸ್ಥೆಯು ಕೊನೆಗೊಂಡಿತು. ಕೆಲವು ಸ್ಪಷ್ಟವಾದ ನ್ಯೂನತೆಗಳ ಹೊರತಾಗಿಯೂ ಈ ವ್ಯವಸ್ಥೆಯು ಒಂದು ಐತಿಹಾಸಿಕ ತೀರ್ಪು ಎಂದು ಸಾಬೀತಾಯಿತು. ಏಕೆಂದರೆ ಈ ವಯೋಮಾನದ ಎಲ್ಲ ಮಕ್ಕಳಿಗೆ ಗುಣಮಟ್ಟದ ಶಿಕ್ಷಣದ ಕನಿಷ್ಠ ಮಾಪನಗಳನ್ನು ಸೂಚಿಸುವುದರ ಜೊತೆಗೆ ಇಡೀ ವ್ಯವಸ್ಥೆಗೆ ಒಂದು ನ್ಯಾಯಸಮ್ಮತವಾದ ಕಾನೂನಿನ ಚೌಕಟ್ಟನ್ನು ಒದಗಿಸಿತು.

ಪ್ರಾಥಮಿಕ ಶಿಕ್ಷಣಕ್ಕೆ ಮೂಲಭೂತ ಅವಶ್ಯಕತೆಗಳನ್ನು ಪೂರೈಸಲು ಮತ್ತು ಶಾಲೆಗಳಲ್ಲಿ

ಸಾಕಷ್ಟು ಶಿಕ್ಷಕರನ್ನು ನೇಮಿಸಲು31ನೇ ಮಾರ್ಚ್ 2013ರಂದು ಕೊನೆಗೊಳ್ಳುವ ಮೂರು ವರ್ಷಗಳ ಗಡುವನ್ನು  ನಿಗದಿಪಡಿಸಲಾಯಿತು. ಶಿಕ್ಷಕರ ತರಬೇತಿಗೆ  ಸಂಬಂಧಿಸಿದ ನಿಬಂಧನೆಗಳ ಜಾರಿಗೆ ಹೆಚ್ಚು ವಿಸ್ತೃತ ಕಾಲಾವಕಾಶವನ್ನು ನೀಡಲಾಯಿತು. ಅಂದರೆ 31ನೇ ಮಾರ್ಚ್ 2015 ರಂದು ಇದು ಕೊನೆಗೊಳ್ಳುವುದಿತ್ತು, ಆದರೆ ಈ ಗಡುವನ್ನು ಸಹ 2019ರ ವರೆಗೆ ವಿಸ್ತರಿಸಲಾಯಿತು. ಕಾಯಿದೆಯನ್ನು ಅಂಗೀಕರಿಸಿ ಏಳು ವರ್ಷಗಳು ಕಳೆದರೂ  ಹಲವಾರು ನಿಬಂಧನೆಗಳು ಇನ್ನೂ ಜಾರಿಯಲ್ಲಿಲ್ಲ ಎಂಬುದನ್ನು ನಾವು ಅಲ್ಲಲ್ಲಿ ಓದುತ್ತೇವೆ, ಕೇಳುತ್ತಿರುತ್ತೇವೆ. ಇದು ಅದರ ವೈಶಿಷ್ಟ್ಯತೆ ಮತ್ತು ಪರಿಣಾಮಕಾರಿ ಅನುಷ್ಠಾನದ ಕುರಿತು ಪ್ರಶ್ನೆ ಎತ್ತುತ್ತವೆ. ಈ ಲೇಖನವು 2011 ರಿಂದ RTE ಅನುಷ್ಠಾನದ ಸ್ಥಿತಿ ಗತಿಯ ಬಗ್ಗೆ, ಶಿಕ್ಷಣ ಹಕ್ಕು ವೇದಿಕೆಯ ವ್ಯವಸ್ಥಿತವಾದ ವಾರ್ಷಿಕ ವಿಮರ್ಶೆಗಳಿಂದ ಒಳನೋಟಗಳನ್ನು ಪಡೆದುಕೊಂಡು ಈ ಎರಡೂ ಕೋನಗಳಿಂದ (ಸ್ವರೂಪ  ಮತ್ತು ಕಾರ್ಯಗತಗೊಳಿಸುವಿಕೆ) ಕಾಯಿದೆಯ ಪ್ರಗತಿ ಮತ್ತು ನ್ಯೂನತೆಗಳನ್ನು ಪರಿಶೀಲಿಸಲು ಪ್ರಯತ್ನಿಸುತ್ತದೆ.

**ಮಹತ್ವ:**

ಈ ಕಾಯಿದೆಯು ಕೇವಲ ಸರಕಾರ ಪ್ರಾರಂಭಿಸಿದ ಮತ್ತೊಂದು ಯೋಜನೆ ಅಥವಾ ಕಾರ್ಯಕ್ರಮವಲ್ಲ ಎಂಬುದನ್ನು ಗಮನಿಸಬೇಕು. ಇದು ಶಿಕ್ಷಣವನ್ನು ಯಾವ ರಾಜಿಗೂ ಅವಕಾಶವಿಲ್ಲದ, ಮಕ್ಕಳ  ಮೂಲಭೂತ ಹಕ್ಕನ್ನಾಗಿ ಪರಿವರ್ತಿಸುವ ಗುರಿಯನ್ನು ಹೊಂದಿದೆ. ಇದು ಪ್ರಭುತ್ವ ತನ್ನ ಮಕ್ಕಳಿಗೆ ನೀಡುವ  ದಾನವಲ್ಲ; ಬದಲಿಗೆ ನ್ಯಾಯಯುತವಾಗಿ ಅವರಿಗೆ ಸಿಗಬೇಕಾದ ಅಧಿಕಾರವಾಗಿದ್ದು ಅದರಿಂದ ಅವರೊಂದು ಘನತೆಯ ಜೀವನ ನಡೆಸಲು ಅನುವು ಮಾಡಿಕೊಡುತ್ತದೆ.

ಶಿಕ್ಷಣವನ್ನು ಮೂಲತಃ ಹಿಂದುಳಿದ ಮತ್ತು ಅಂಚಿನಲ್ಲಿರುವ ಮಕ್ಕಳಿಗೆ ಸಹಾಯ ಮಾಡಲು ಮೂಲಭೂತ ಹಕ್ಕನ್ನಾಗಿ ಮಾಡಲಾಗಿದೆಯೇ ಹೊರತು ಸಾಕಷ್ಟು ಸಂಪನ್ಮೂಲಗಳನ್ನು ಹೊಂದಿರುವ ಸುಸಜ್ಜಿತ, ಖಾಸಗಿ ಶಾಲೆಗಳಿಗೆ ಸುಲಭ ಪ್ರವೇಶ ಪಡೆಯುವವರಿಗಾಗಿ ಅಲ್ಲ. ಈ ಹಕ್ಕನ್ನು ಎಲ್ಲ ಮಕ್ಕಳಿಗೂ ಸಮಾನವಾದ ಶೈಕ್ಷಣಿಕ ಅವಕಾಶ ಮತ್ತು ಅನುಭವಗಳಾಗಿ ಪರಿವರ್ತಿಸುವ ಅಗತ್ಯವಿದೆ. ಬದಲಿಗೆ ಇದು ಅಗ್ಗದ , ಕಳಪೆ  ಶಿಕ್ಷಣವನ್ನು ಈ ವರೆಗೆ ಉಪೇಕ್ಷೆಗೊಳಗಾದ ಮಕ್ಕಳಿಗೆ ನೀಡುವ ಯೋಜನೆ ಎಂದು ಪರಿಗಣಿತವಾಗಬಾರದು.

ಈ ಹಕ್ಕು ಅಪ್ರಾಪ್ತ ವಯಸ್ಕರಿಗೆ ಸಂಬಂಧಿಸಿರುವುದರಿಂದ, ವಯಸ್ಕರು ಅಥವಾ ಒಂದು ಸಂಸ್ಥೆ ಇದರ ಜವಾಬ್ದಾರಿಯನ್ನು ತೆಗೆದುಕೊಂಡು ಯಾವುದೇ ಉಲ್ಲಂಘನೆಯಾಗದಂತೆ ನಿಸ್ಸಂದಿಗ್ದವಾಗಿ ಕಾರ್ಯರೂಪಕ್ಕೆ ತರಬೇಕು. ಪಾಲಕರು ಮಕ್ಕಳ ಸಹಜ ಪೋಷಕರಾಗಿದ್ದರೂ, ಶಿಕ್ಷಣಕ್ಕೆ ಪ್ರವೇಶ, ಸಮಾನತೆ ಮತ್ತು ಗುಣಮಟ್ಟದಂತಹ ಸಮಸ್ಯೆಗಳಿಗೆ ಅವರು ಜವಾಬ್ದಾರರಾಗಿರುವುದಿಲ್ಲ. ಪ್ರಾಥಮಿಕ ಶಿಕ್ಷಣವು ಸಂಪೂರ್ಣವಾಗಿ ಪ್ರಭುತ್ವದ ಜವಾಬ್ದಾರಿಯಾಗಿದೆ ಎಂದು ತಾತ್ವಿಕವಾಗಿ ಈ ಕಾಯಿದೆಯು ಗುರುತಿಸುತ್ತದೆ. ಅದು ದಕ್ಷತೆ, ಉತ್ಕೃಷ್ಟತೆ ಅಥವಾ ಪಾಲುದಾರಿಕೆಯ ಹೆಸರಿನಲ್ಲಿ ಸಹಾ ತನ್ನ ಜವಾಬ್ದಾರಿಯನ್ನು ನಾಗರಿಕ ಸಮಾಜದ ಅಥವಾ ಖಾಸಗಿಯವರ ತಲೆಗೆ ಕಟ್ಟುವಂತಿಲ್ಲ.

**ನಿಬಂಧನೆಗಳನ್ನು ಸಕ್ರಿಯಗೊಳಿಸುವುದು**ಈ ಕಾಯಿದೆಯು ಕೆಲವು ಮೂಲಭೂತ ನಿಬಂಧನೆಗಳನ್ನು ಕಡ್ಡಾಯಗೊಳಿಸಿಲ್ಲದೆ ಭಾರತೀಯ ಶಿಕ್ಷಣ ವ್ಯವಸ್ಥೆಯನ್ನು ಸುಧಾರಿಸಲು ಕೆಲವು ಅತ್ಯಂತ ಪ್ರಗತಿಪರ ಕ್ರಮಗಳನ್ನು ಪರಿಚಯಿಸಿತು. ಪ್ರತಿ ಮಗುವಿನ ವಾಸಸ್ಥಳದ ಸಮೀಪದಲ್ಲಿ ಶಾಲೆ ಇರಬೇಕು (ಪ್ರಾಥಮಿಕ ಹಂತಕ್ಕೆ 1 ಕಿ.ಮೀ ಮತ್ತು ಹಿರಿಯ ಪ್ರಾಥಮಿಕ ಹಂತಕ್ಕೆ 3 ಕಿ.ಮೀ). (ಶಾಲೆಯಿಂದ ಹೊರಗುಳಿದ ಮಕ್ಕಳು ಅಥವಾ ಶಾಲೆಯಿಂದ ನಡುವೆಯೇ ಹೊರಬಿದ್ದವರಿಗೆ ವಿಶೇಷ ತರಬೇತಿಯನ್ನು ಕಡ್ಡಾಯಗೊಳಿಸುವ ಮೂಲಕ ಅವರು ತಮ್ಮ ವಯೋಮಾನದವರ ಜೊತೆ ಸಮಾನ ಕಲಿಕೆಯನ್ನು ಹೊಂದಲು ಅವಕಾಶ ಮಾಡಿತು. ) ಈ ಮೂಲಕ ವಯೋಮಾನ ಸಹಜ ವಿದ್ಯಾಭ್ಯಾಸದ ಅಗತ್ಯವನ್ನು ಪೂರೈಸಿತು.ಪ್ರತಿಯೊಂದು ಶಾಲೆಗೂ ಮೂಲಭೂತ ಸೌಕರ್ಯ ಮತ್ತು ಶಿಕ್ಷಕ-ವಿದ್ಯಾರ್ಥಿ ಅನುಪಾತಕ್ಕೆ ಸಂಬಂಧಿಸಿದ ಮಾನದಂಡಗಳನ್ನು ರಚಿಸಲಾಯಿತು. ನಿರಂತರ ಮತ್ತು ಸಮಗ್ರ ಮೌಲ್ಯಮಾಪನವನ್ನು ಪರಿಚಯಿಸಿತು. ದೈಹಿಕ ಶಿಕ್ಷೆಯನ್ನು ಕಾನೂನುಬಾಹಿರಗೊಳಿಸಿತು. ಖಾಸಗಿ ವಲಯವನ್ನೂ ತನ್ನ ವ್ಯಾಪ್ತಿಯೊಳಗೆ ಒಳಪಡಿಸಿತು. ಹಾಗೂ ಗುಣಮಟ್ಟದ ಮಾಪನವನ್ನು ಖಾಸಗಿ ಶಾಲೆಗಳಿಗೂ ವಿಸ್ತರಿಸಿತು. ಶೈಕ್ಷಣಿಕೆ ಪ್ರಕ್ರಿಯೆಯಲ್ಲಿ ಪೋಷಕರನ್ನೂ ಒಳಗೊಂಡಂತೆ ಎಲ್ಲಾ ಭಾಗೀದಾರರನ್ನು ಸೇರಿಸಿ ಶಾಲಾ ನಿರ್ವಹಣಾ ಸಮಿತಿಯನ್ನು ಪ್ರತಿ ಶಾಲೆಯಲ್ಲಿಯೂ ರಚಿಸಲಾಯಿತು. ಹಾಗಾಗಿ ಇದನ್ನು ಜಾರಿಗೊಳಿಸಲು ಒಂದು ಪ್ರಮಾಣೀಕೃತ ಚೌಕಟ್ಟನ್ನು ಒದಗಿಸುವುದರ ಜೊತೆಗೆ ಈ ಕಾಯಿದೆಯು ಮಕ್ಕಳಿಗೆ ಭಯಮುಕ್ತ ಶಿಕ್ಷಣ ಮತ್ತು ಕಲಿಕೆಯ ವಾತಾವರಣವನ್ನು

ನೀಡಲು ಹಲವು ನಿಬಂಧನೆಗಳನ್ನು ಜಾರಿಗೆ ತಂದಿತು ಹಾಗೂ ಸದ್ಯ ಅಸ್ತಿತ್ವದಲ್ಲಿರುವ ಪಠ್ಯಕ್ರಮ ಮತ್ತು ಮೌಲ್ಯಮಾಪನ ಕ್ರಮಗಳನ್ನು ಸುಧಾರಿಸಿತು. ಈ ಸಂದರ್ಭದಲ್ಲಿ ಮಕ್ಕಳನ್ನು ಎಂಟನೇ ತರಗತಿಯವರಿಗೆ ನಪಾಸು ಮಾಡಬಾರದು ಎಂಬ ಪ್ರಗತಿಪರ ನಿಬಂಧನೆಯನ್ನು ಜಾರಿಗೆ ತರಲಾಯಿತು. ದುರದೃಷ್ಟವಶಾತ್ ಇದು ಅತ್ಯಂತ ವಿವಾದಿತ ನಿಬಂಧನೆಗಳಲ್ಲಿ ಒಂದಾಗಿದ್ದು ಅಂತಿಮವಾಗಿ ತೆಗೆದು ಹಾಕಲಾಯಿತು.

**ಅಂತರ್ಗತ ಲೋಪ-ದೋಷ**

ಈ ಕಾಯಿದೆ ಕೆಲವು ಗಂಭೀರ ಲೋಪಗಳನ್ನು ಹೊಂದಿದೆ. ಮೊದಲನೆಯದಾಗಿ 0-6 ವಯೋಮಾನದ ಮತ್ತು ೧೪-೧೮ರ ನಡುವಣ ವಯಸ್ಸಿನ ಮಕ್ಕಳನ್ನು ಕಾಯಿದೆಯ ವ್ಯಾಪ್ತಿಯಿಂದ ಹೊರಗಿಡುವುದು. (ಮಕ್ಕಳ ಶೈಕ್ಷಣಿಕ ಅಥವಾ ಜೀವನ ಪ್ರಯಾಣ ದಲ್ಲಿ ಪ್ರಗತಿ ಸಾಧಿಸಲು ಪ್ರಾಥಮಿಕ ಶಾಲಾ ಶಿಕ್ಷಣವು ಸಾಕಾಗುತ್ತದೆ ಎಂಬುದನ್ನು ಊಹಿಸುವುದು ಕಷ್ಟ). ಕೊಠಾರಿ ಕಮಿಷನ್ ತನ್ನ ವರದಿಯಲ್ಲಿ (1964-66) (ಭಾರತೀಯ ಸರಕಾರ 1966) ಪರಿಭಾವಿಸಿದಂತೆ ಈ ಕಾಯಿದೆಯು ಸಾಮಾನ್ಯ ಶಿಕ್ಷಣ ವ್ಯವಸ್ಥೆ ಹೋಗಲಿ, ಸಾರ್ವಜನಿಕ ಶಿಕ್ಷಣದ ರಾಷ್ಟ್ರೀಯ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವಲ್ಲಿಯೂ ಸೋತಿದೆ. ತ ಜ್ಞರ ಪ್ರಕಾರ ೀ ಕಾಯಿದೆ ಸರಕಾರಿ ಮತ್ತು ಖಾಸಗಿ ವಲಯದಲ್ಲಿರುವ ಶ್ರೇಣೀಕೃತ ಶೈಕ್ಷಣಿಕ ಸಂರಚನೆಯನ್ನು ಕಾನೂನುಬದ್ಧಗೊಳಿಸುತ್ತದೆ. ಕಾಯಿದೆಯನ್ನು ಜಾರಿಗೊಳಿಸುವಲ್ಲಿ ಸ್ಪಷ್ಟವಾದ ಸಂಪನ್ಮೂಲಗಳ ಹಂಚಿಕೆಯ ಕುರಿತು ಯಾವುದೇ ಸ್ಪಷ್ಟತೆ ಇಲ್ಲ. ಬೀದಿ ಮಕ್ಕಳು, ವಲಸಿಗ ಕುಟುಂಬದ ಮಕ್ಕಳು, ಸಂಘರ್ಷ ವಲಯದ ಮಕ್ಕಳು, ನಿರ್ದಿಷ್ಟ ತೊಂದರೆ ಇರುವ ಮಕ್ಕಳಂತಹ ಸಮಾಜದ ಅಂಚಿನಲ್ಲಿರುವ ಗುಂಪುಗಳ ಮಕ್ಕಳ ಕಲಿಕೆಗೆ ಇದು ಯಾವುದೇ ವಿಶೇಷ ಕಟ್ಟಳೆಗಳನ್ನು ಮಾಡುವುದಿಲ್ಲ. ಮೊದಲ ತಲೆಮಾರಿನ ವಿದ್ಯಾರ್ಥಿಗಳನ್ನು ಅನಾನುಕೂಲಕರ ಮಕ್ಕಳು ಎಂಬ ಒಂದೇ ವರ್ಗಕ್ಕೆ ಸೇರಿಸಲಾಯಿತು. ಕಾಯಿದೆಯನ್ನು ಅನುಷ್ಠಾನಗೊಳಿಸುವ ರಾಜ್ಯ ಮತ್ತು ಸಂಸ್ಥೆಗಳು ಇಂತಹ ಸಂಗತಿಗಳ ಕುರಿತು ಸೂಕ್ಷ್ಮವಾಗಿ ವರ್ತಿಸುತ್ತವೆ, ಸಮಸ್ಯೆಗಳನ್ನು ಗುರುತಿಸುತ್ತವೆ ಮತ್ತು ಅಗತ್ಯ ಹಣಕಾಸನ್ನು ಒದಗಿಸುತ್ತವೆ ಎಂಬ ತಪ್ಪು ಊಹನೆಯ ಆಧಾರದಲ್ಲಿ ಈ ಕಾಯಿದೆ ಕಾರ್ಯನಿರ್ವಹಿಸುವಂತೆ ಕಾಣುತ್ತಿದೆ.

**ಈ ವರೆಗಿನ ಪಯಣ**

2010 ರಲ್ಲಿ ಜಾರಿಯಾದಾಗಿನಿಂದ ಈ ಕಾಯಿದೆಯ ಅನುಷ್ಠಾನವು ಸುಗಮವಾಗಿಲ್ಲ. ವರುಷಾನುಗಟ್ಟಲೆ ಪ್ರಭುತ್ವದ ನಿರ್ಲ್ಯಕ್ಷದಿಂದ ಹುಟ್ಟಿಕೊಂಡ ಸಮಸ್ಯೆಗಳನ್ನು ಗಮನಿಸಿದರೆ ಇದರ ಅನುಷ್ಠಾನ ಇನ್ನೂ ಉತ್ತಮವಾಗಿರುತ್ತಿತ್ತು ಎಂದು ಊಹಿಸುವುದು ಅವಾಸ್ತವಿಕವಾಗುತ್ತಿತ್ತು. ಈ ಸಂದರ್ಭದಲ್ಲಿ ಎಲ್ಲಾ ರಾಜ್ಯಗಳಲ್ಲೂ ಈ ಕಾಯಿದೆಯ ಅನುಷ್ಠಾನ ಒಂದೇ ರೀತಿಯಲ್ಲಿ ಆಗಿಲ್ಲ ಎಂಬುದನ್ನು ಗಮನಿಸಬೇಕು. ಕೆಲವು ರಾಜ್ಯಗಳು ಅತ್ಯುತ್ತಮ ಪ್ರಗತಿ ಸಾಧಿಸಿದ್ದರೆ ಇನ್ನು ಕೆಲವು ರಾಜ್ಯಗಳು ಹಿಂದೆ ಬಿದ್ದಿವೆ. ಪೂರಕ ವಾತಾವರಣ, ಅಗತ್ಯವಾದ ಸಂಪನ್ಮೂಲ ಮತ್ತು ಬಲವಾದ ರಾಜಕೀಯ ಇಚ್ಛಾಶಕ್ತಿ ಇದ್ದರೆ ಈ ಕಾಯಿದೆಯು ಬದಲಾವಣೆ ತರುವ ಅತ್ಯುತ್ತಮ ಸಾಮರ್ಥ್ಯವನ್ನು ಹೊಂದಿದೆ ಎಂಬುದನ್ನು ಕೆಲವು ರಾಜ್ಯಗಳ ಯಶಸ್ಸು ಸೂಚಿಸುತ್ತದೆ.

ಈ ವರೆಗೆ ಕೆಲವು ಗಮನಾರ್ಹವಾದ ಆದರೆ ಮಿಶ್ರ ಸಾಧನೆಗಳಾಗಿವೆ. ಶಿಕ್ಷಣಕ್ಕಾಗಿ ಜಿಲ್ಲಾ ಮಾಹಿತಿ ವ್ಯವಸ್ಥೆ (DISE) (2015-16) ಮಾಹಿತಿಯ ಪ್ರಕಾರ, ಮಕ್ಕಳ ಒಟ್ಟು ದಾಖಲಾತಿ ಅನುಪಾತವು (GER) ಪ್ರಾಥಮಿಕ ಹಂತದಲ್ಲಿ 99.21% ಮತ್ತು ಹಿರಿಯ ಪ್ರಾಥಮಿಕ ಹಂತದಲ್ಲಿ 92.81% ಆದರೆ ನಿವ್ವಳ ದಾಖಲಾತಿ ಅನುಪಾತವು (NER) ಪ್ರಾಥಮಿಕ ಹಂತದಲ್ಲಿ 91.64% ಮತ್ತು ಹಿರಿಯ ಪ್ರಾಥಮಿಕ ಹಂತದಲ್ಲಿ 90.09% ಆಗಿತ್ತು. ಇದು ಸಕಾರಾತ್ಮಕ ಸುಧಾರಣೆಯನ್ನು ಸೂಚಿಸುತ್ತದಾದರೂ ಇಲ್ಲಿ ಗಮನಿಸಬೇಕಾದದ್ದು ಏನೆಂದರೆ ಪ್ರವೇಶದ ಸಮಸ್ಯೆ ಮುಖ್ಯವಾಗಿದ್ದರೂ ಪ್ರವೇಶದ ಸ್ವರೂಪ ಹಾಗೂ ಇಲ್ಲಿಯ ಕಲಿಕೆಯ ಅನುಭವದ ಗುಣಮಟ್ಟ ಹೆಚ್ಚು ಪ್ರಸ್ತುತತೆಯನ್ನೂ ಸಾಮಾಜಿಕ ಮಹತ್ವವನ್ನೂ ಹೊಂದಿದೆ ಎಂಬುದನ್ನು. ವಿವಿಧ ಮೌಲ್ಯಮಾಪನ ಸಮೀಕ್ಷೆಗಳು ಎಲ್ಲಾ ಶಾಲೆಗಳ ಮಕ್ಕಳ ಕಲಿಕೆಯ ಗುಣಮಟ್ಟಗಳಲ್ಲಿನ ಕುಸಿತವನ್ನು ಅದರಲ್ಲೂ ಮುಖ್ಯವಾಗಿ ಸರ್ಕಾರಿ ಶಾಲೆಗಳ ಕಲಿಕೆಯ ಗುಣಮಟ್ಟದ ಕುಸಿತವನ್ನು ಪದೇ ಪದೇ ದಾಖಲಿಸಿವೆ. ಅದಲ್ಲದೇ ಶಿಕ್ಷಣ ಪ್ರಕ್ರಿಯೆಗಳು ತೃಪ್ತಿಕರವಾಗಿಲ್ಲ. ೨೦೦೫ರ ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟು ಅಥವಾ CCE ಮೌಲ್ಯಮಾಪನದ ಚೌಕಟ್ಟಿಗೆ ಅನುಸಾರವಾಗಿಯೂ ಶಿಕ್ಷಣದ ಪ್ರಕ್ರಿಯೆಗಳು ಇಲ್ಲ. ಇದು ಮೂಲಭೂತವಾಗಿ ಕಂಠಪಾಠ ಆಧಾರಿತ ಶಿಕ್ಷಣವನ್ನು ಪುನರ್ ರೂಪಿಸಲು ಇರುವ

ಎರಡು ಅತ್ಯಂತ ಪ್ರಗತಿಶೀಲ ಕ್ರಮಗಳಾಗಿವೆ.

ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಾಲೆಗಳ ಒಟ್ಟು ಸಂಖ್ಯೆಯಲ್ಲಿ ಕುಡಿಯುವ ನೀರು , ಆಟದ ಮೈದಾನಗಳು ಮತ್ತು ಬಾಲಕಿಯರ ಶೌಚಾಲಯದಂತಹ ಮೂಲಭೂತ ಸೌಕರ್ಯಗಳಲ್ಲಿ ಸುಧಾರಣೆಯಾಗಿದೆ. DISE 2014-15 ರ ಪ್ರಕಾರ 96.06% ಪ್ರಾಥಮಿಕ ಶಾಲೆಗಳಲ್ಲಿ ಕುಡಿಯುವ ನೀರಿನ ವ್ಯವಸ್ಥೆ, 92.03% ಶಾಲೆಗಳಲ್ಲಿ ಬಾಲಕರ ಶೌಚಾಲಯಗಳು, ಮತ್ತು 92.54% ಶಾಲೆಗಳಲ್ಲಿ ಬಾಲಕಿಯರ ಶೌಚಾಲಯಗಳ ಲಭ್ಯತೆ ಇತ್ತು. ಹಾಗಿದ್ದೂ ಎಲ್ಲಾ ರಾಜ್ಯಗಳು ಮತ್ತು ಶಾಲೆಗಳು ಇದನ್ನು ಎಷ್ಟರ ಮಟ್ಟಿಗೆ ಮತ್ತು ಯಾವ ಗುಣಮಟ್ಟದಲ್ಲಿ  ಸಾಧಿಸಿವೆ ಎಂಬ ಬಗ್ಗೆ ಖಚಿತತೆ ಇಲ್ಲ. ಇದಲ್ಲದೇ, ಶೇ.40 ರಷ್ಟು ಶಾಲೆಗಳಲ್ಲಿ ಆಟದ ಮೈದಾನಗಳಿಲ್ಲ ಮತ್ತು ಪ್ರತಿಶತ 20ಕ್ಕೂ ಹೆಚ್ಚು ಶಾಲೆಗಳಲ್ಲಿ ಗ್ರಂಥಾಲಯಗಳ ಲಭ್ಯತೆ ಇಲ್ಲ.

ಈ ಕಾಯಿದೆಯ ಅನುಷ್ಠಾನದ ಮೇಲ್ವಿಚಾರಣೆಗಾಗಿ ಮೂವತ್ತೆರಡು ರಾಜ್ಯಗಳು, ಸಮಿತಿಗಳನ್ನು ನೇಮಿಸಿಕೊಂಡಿವೆ ಎಂಬ ವರದಿ ಇದೆ. ಈ ಕಾಯಿದೆಯ ಅನುಷ್ಠಾನಕ್ಕಾಗಿ ಮಾನವ ಸಂಪನ್ಮೂಲ ಸಚಿವಾಲಯದಿಂದ ರಾಷ್ಟೀಯ ಮಕ್ಕಳ ಹಕ್ಕುಗಳ ರಕ್ಷಣಾ ಆಯೋಗ ಎಂಬ ಸ್ವತಂತ್ರ ಅಂಗ ಸಂಸ್ಥೆಯನ್ನು,  ಸ್ಥಾಪಿಸಲಾಯಿತು. ಹಾಗಿದ್ದೂ ಇದು ಸುಗಮವಾಗಿ  ಮತ್ತು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುತ್ತದೆ ಎಂದರ್ಥವಲ್ಲ. ಏಕೆಂದರೆ ಇದು ಆದೇಶ ನೀಡುವ ಅಧಿಕಾರವನ್ನಾಗಲೀ, ಅಗತ್ಯ ಸಂಪನ್ಮೂಲಗಳನ್ನಾಗಲೀ ಹೊಂದಿಲ್ಲ. ಸುಮಾರು 59% (4881) ದೂರುಗಳನ್ನು ಜನವರಿ 2017ರ ವರೆಗೆ ಪರಿಹರಿಸಲಾಗಿಲ್ಲ ಎಂಬ ವರದಿಯಿದೆ (RTE Forum 2016-17). ಕೆಲವು ರಾಜ್ಯಗಳಲ್ಲಿ ಮಕ್ಕಳ ಹಕ್ಕುಗಳ ರಕ್ಷಣೆಗಾಗಿ ರಾಜ್ಯ ಆಯೋಗಗಳನ್ನು ಸ್ಥಾಪಿಸಲಾಗಿದೆ (SCPCRs). ಆದರೆ ಅವುಗಳಲ್ಲಿ ಸಿಬ್ಬಂದಿಯ ಕೊರತೆ ಇರುವುದರ ಜೊತೆಗೆ ಅವು ಸರಕಾರದ ಹಸ್ತಕ್ಷೇಪದಿಂದ  ಸಂಪೂರ್ಣವಾಗಿ ಮುಕ್ತವಾಗಿಲ್ಲ. ಈ ಸಂಸ್ಥೆಗಳು ಯಾವುದಾದರೂ ಸರಕಾರೀ ಅಧಿಕಾರಿಗಳಿಗೆ ಅಥವಾ ಸಂಸ್ಥೆಗಳಿಗೆ ದಂಡನೆ ವಿಧಿಸಿವೆಯೇ ಎಂಬುದನ್ನು ಪರಿಶೀಲಿಸಿದಾಗ ಇವುಗಳು ಎಷ್ಟು ಪರಿಣಾಮಕಾರಿ ಎಂಬುದು ತಿಳಿಯುತ್ತದೆ. ಕೆಲವು ಸಕಾರಾತ್ಮಕ ವರದಿಗಳೂ ಇವೆ. ಮಧ್ಯ ಪ್ರದೇಶ ಮತ್ತು ಒರಿಸ್ಸಾ ರಾಜ್ಯಗಳು ಕುಂದುಕೊರತೆಗಳನ್ನು ನಿವಾರಿಸಲು ಶುಲ್ಕರಹಿತ ದೂರವಾಣಿ  ಸಂಖ್ಯೆಯಂತಹ ನವೀನ ಕ್ರಮಗಳನ್ನು ಜಾರಿಗೊಳಿಸಿದೆ. ಮತ್ತು ಒರಿಸ್ಸಾ ತನ್ನ ಶೈಕ್ಷಣಿಕ ಪೋರ್ಟಲ್ ಮೂಲಕ

ಶಾಲೆಗಳ ಕಾರ್ಯ ನಿರ್ವಹಣೆಯ ಮಾಹಿತಿಯನ್ನು ಒದಗಿಸುವ ಮತ್ತು ಮಕ್ಕಳ ಭಾಗವಹಿಸುವಿಕೆಯನ್ನು ಪತ್ತೆ ಹಚ್ಚುವ ವ್ಯವಸ್ಥೆಯನ್ನು ಅಭಿವೃದ್ದಿಪಡಿಸಿದೆ.

**ಎದ್ದುಕಾಣುವ ಅಡಚಣೆಗಳು**

ಕಾಯಿದೆಯನ್ನು ಅನುಷ್ಠಾನಕ್ಕೆ ತರುವಲ್ಲಿ ಸಮಯಪಾಲನೆ ಆಗಲಿಲ್ಲ ಎಂಬುದು ಮಾತ್ರವೇ ಅಲ್ಲದೆ ಇನ್ನಷ್ಟು ಕಾರ್ಯಕ್ಷೇತ್ರಗಳಲ್ಲೂ ಅನುಷ್ಠಾನ ಮುಗ್ಗರಿಸುತ್ತಿದೆ. ಇತ್ತೀಚಿನ DSE ಡೇಟಾವು ಭಾರತದಲ್ಲಿ ಕೇವಲ 9.54% ಶಾಲೆಗಳು RTE ಮಾನದಂಡಗಳ ಪ್ರಕಾರ ಸಂಪೂರ್ಣ ಮೂಲಭೂತ ಸೌಕರ್ಯ ಮತ್ತು ಶಿಕ್ಷಕರ ಲಭ್ಯತೆ ಹೊಂದಿವೆ ಎಂಬುದನ್ನು ತೋರಿಸುತ್ತದೆ. 21 ರಾಜ್ಯಗಳು ರಾಷ್ಟ್ರೀಯ ಸರಾಸರಿಗಿಂತ ಕೆಳಗಿವೆ. ಕೆಲವು ಕ್ಷೇತ್ರಗಳಲ್ಲಿ ಕೈ ಗೊಂಡಿರುವ ಕ್ರಮಗಳು ಒಂದೋ ನಿಧಾನವಾಗಿವೆ ಇಲ್ಲ ದಾರಿ ತಪ್ಪಿವೆ .

ಭಾರತೀಯ ಶಿಕ್ಷಣ ವ್ಯವಸ್ಥೆಯಲ್ಲಿ ಮಕ್ಕಳ ಸಾಮಾಜಿಕ ಹಿನ್ನೆಲೆ ಮತ್ತು ಅವರ ಕಲಿಕೆಯ ಅನುಭವಗಳ ನಡುವೆ ಬಲವಾದ ಸಂಬಂಧವಿದೆ. ದೇಸಾಯಿ ಮತ್ತಿತರರ(2010) ಪ್ರಕಾರ ಶಿಕ್ಷಣದಲ್ಲಿ ಸಂಪೂರ್ಣ ಸಾಮಾಜಿಕ ಅಸಮಾನತೆ ಇದೆ. ಇದು ದಾಖಲಾತಿ ಮತ್ತು ಶಾಲೆ ತೊರೆಯುವ ಸಂಖ್ಯೆಯ ಮೇಲೆ ಪರಿಣಾಮ ಬೀರುತ್ತದೆ. ದಲಿತ, ಆದಿವಾಸಿ ಮತ್ತು ಮುಸ್ಲಿಂ ಮಕ್ಕಳು ಶಾಲೆಗಳಿಗೆ ದಾಖಲಾಗುವ ಸಾಧ್ಯತೆ ತೀರಾ ಕಡಿಮೆ ಮತ್ತು ಶಾಲೆ ಬಿಡುವ ಸಾಧ್ಯತೆ ಸ್ವಲ್ಪ ಹೆಚ್ಚು. ಹೀಗಾಗಿ ಪ್ರತಿಶತ 94% ಮೇಲು ಜಾತಿಯ ಮಕ್ಕಳು ಮತ್ತು 96% ಇತರ ಧರ್ಮಗಳ ಮಕ್ಕಳು ದಾಖಲಾಗಿದ್ದರೆ, ದಲಿತರ, ಆದಿವಾಸಿಗಳ, ಮುಸಲ್ಮಾನರ ಅಂಕಿ ಅಂಶಗಳು ಕ್ರಮವಾಗಿ 83%, 77% ಮತ್ತು 76% ಆಗಿದೆ. ಈ ಗುಂಪುಗಳ ಮಕ್ಕಳ ಶಾಲಾ ಅನುಭವದಲ್ಲಿ ದೈಹಿಕ ಮತ್ತು ಸಾಂಕೇತಿಕ ಹಿಂಸೆಯೂ ಸೇರಿಕೊಂಡಿದೆ ಎಂಬುದನ್ನು ಸಂಶೋಧನಾ ಅಧ್ಯಯನಗಳು ಮತ್ತು ವರದಿಗಳು ತೋರಿಸುತ್ತವೆ.

ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯಿಂದ ಹೊರಗೆ ಉಳಿದಿರುವ ಮಕ್ಕಳ ದೊಡ್ಡ ಸಂಖ್ಯೆ ಇನ್ನೂ ಇದೆ. ಈ ವರ್ಗಕ್ಕೆ ಸಂಬಂಧಿಸಿದ ಮಕ್ಕಳ ವರದಿ ಮಾಡಿದ ಬೇರೆ ಬೇರೆ ಏಜೆನ್ಸಿಗಳ ಮಾಹಿತಿಯಲ್ಲಿ ತೀವ್ರ ವ್ಯತ್ಯಾಸಗಳಿವೆ. MHRD ಸರ್ವೆ 2014ರ ಪ್ರಕಾರ ೬೦ ಲಕ್ಷ ಮಕ್ಕಳು ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯ ಹೊರಗಿದ್ದಾರೆ. 2011 ರ ಗಣತಿಯ ಪ್ರಕಾರ ಈ ಸಂಖ್ಯೆ ೩.೮ ಕೋಟಿ. ಶಾಲೆಗೆ ಸೇರಿದರೂ ಸಹ ಪ್ರಾಥಮಿಕ ಶಿಕ್ಷಣ ಮುಗಿಸುವ ಮುನ್ನವೇ ಶಾಲೆ

ಬಿಡುವವರ ಸಂಖ್ಯೆ ಹೆಚ್ಚಿದೆ. ಇದು ಲಭ್ಯವಿರುವ ಅಂಕಿ ಅಂಶಗಳಾದರ, ವಾಸ್ತವದಲ್ಲಿ ಗಮನಕ್ಕೆ ಬಾರದ ಸಂಖ್ಯೆ ಇನ್ನೆಷ್ಟು ಹೆಚ್ಚಿರಬಹುದು ಎಂಬುದನ್ನು ಊಹಿಸಬಹುದು. ಈ ಮಕ್ಕಳಲ್ಲಿ ಹೆಚ್ಚಿನ ಪಾಲು ಬಡವರ್ಗದವರು ಮತ್ತು ಸಮಾಜದ ಅಂಚಿನಲ್ಲಿರುವ - ಬೀದಿ ಬದಿಯ ಮಕ್ಕಳು, ಬಾಲ ಕಾರ್ಮಿಕರು, ಸಂಘರ್ಷ ವಲಯದಲ್ಲಿನ ಮಕ್ಕಳು ಹಾಗೂ ಅಂಗವೈಕಲ್ಯದಿಂದ ಬಳಲಿರುವವರು ಇರುತ್ತಾರೆ.

ಕಾಯಿದೆಯಲ್ಲಿ ಅವಕಾಶ ಕಲ್ಪಿಸಿದಂತೆ ಸಮಾಜದ ಕೆಳಹಂತದ ಎಷ್ಟು ಮಕ್ಕಳಿಗೆ ವಿಶೇಷ ತರಬೇತಿ ನೀಡಲಾಗಿದೆ ಮತ್ತು ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯ ಒಳಗೆ ಪ್ರವೇಶ ನೀಡಲಾಗಿದೆ ಎಂಬುದರ ಮಾಹಿತಿ ಲಭ್ಯವಿಲ್ಲ.

RTE ಕಾಯಿದೆಯು ತನ್ನ ಗುರಿ ಸಾಧಿಸಲು ವಿಫಲವಾಗಿರುವುದಕ್ಕೆ ಒಂದು ಪ್ರಾಥಮಿಕ ಕಾರಣವೆಂದರೆ ಅದರ ಅನುಷ್ಠಾನಕ್ಕೆ ಎಂದೇ ಮೀಸಲಿಟ್ಟ ಯಾವುದೇ ಹಣಕಾಸಿನ ಸಂಪನ್ಮೂಲಗಳಿಲ್ಲ. ಕಾಯಿದೆಯ ಅಂಗೀಕಾರವಾದಾಗಲೂ ಅದರ ಅನುಷ್ಠಾನಕ್ಕೆ ಬೇಕಾದ ಹಣಕಾಸಿನ ಲಭ್ಯತೆಯನ್ನು ಖಚಿತಪಡಿಸುವ ಹಣಕಾಸು ಪತ್ರವಿರಲಿಲ್ಲ. ಜೊತೆಗೆ ಕಾಯಿದೆಯ ಅನುಷ್ಠಾನಕ್ಕೆ ಮೀಸಲಾದ ಸಂಸ್ಥೆಯಾದ ಸರ್ವ ಶಿಕ್ಷಣ ಅಭಿಯಾನಕ್ಕೆ ಬಜೆಟ್ ಹಂಚಿಕೆ ಕ್ರಮೇಣ ಕುಸಿತ ಕಂಡಿದೆ. (2012-13 ರಲ್ಲಿ 23873 ಕೋಟಿ ರೂಪಾಯಿಯಿಂದ 2015-16 ಕ್ಕೆ 22500 ಕೋಟಿ ರೂಪಾಯಿಗಳು). ಭಾರತದ ಜಿ.ಡಿ.ಪಿ ಯ 6% ಅನ್ನು ಶಿಕ್ಷಣಕ್ಕೆ ಮೀಸಲಿಡುವ ಕೊಠಾರಿ ಕಮಿಷನ್ ಸಲಹೆ ಇನ್ನೂ ದೂರದ ಕನಸಾಗಿ ಉಳಿದಿದೆ. ವಾಸ್ತವದಲ್ಲಿ ಇದಿನ್ನೂ 3.5% ರಲ್ಲೇ ನಿಂತಿದೆ. ಒಂದು ಕಡೆ ಸೀಮಿತ ನಿಧಿ, ಇನ್ನೊಂದು ಕಡೆ ಈ ನಿಧಿಯ ಕಡಿಮೆ ಬಳಕೆ. ಲೆಕ್ಕ ಪರಿಶೋಧನೆಯ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ ಇತ್ತೀಚೆಗೆ ಸಂಸತ್ತಿನಲ್ಲಿ ಮಂಡಿಸಿದ ಲೆಕ್ಕ ಪರಿಶೋಧನೆ ವರದಿಯಲ್ಲಿ " ಸರ್ಕಾರ/ರಾಜ್ಯಗಳು ಮತ್ತು ಅನುಷ್ಠಾನ ಮಾಡಬೇಕಾದ ಸಂಸ್ಥೆಗಳು ಈ ನಿಧಿಯನ್ನು ನಿರಂತರವಾಗಿ ಬಳಸಿಕೊಳ್ಳುತ್ತಿಲ್ಲ. " ಎಂದು ಹೇಳಿದೆ. ಈ ಖೋತಾ ಪ್ರಮಾಣವು 2010-11 ಮತ್ತು 2015-16 ರ ನಡುವೆ 21%-41% ರಷ್ಟಿತ್ತು. ರಾಜ್ಯ ಸರ್ಕಾರಗಳು ಕಾಯಿದೆಯ ಆರಂಭದ ಆರು ವರ್ಷಗಳಲ್ಲಿ 87 ಸಾವಿರ ಕೋಟಿಯಷ್ಟು ಮೂಲ ನಿಧಿಯನ್ನು ಬಳಸಿಕೊಳ್ಳುವಲ್ಲಿ ವಿಫಲವಾಗಿ ಕಾಯಿದೆಯ ಪರಿಣಾಮಕಾರಿ ಅನುಷ್ಠಾನ ಸಾಧ್ಯವಾಗಿಲ್ಲ (ನಂದಾ 2017).

ಲೆಕ್ಕಿಗ ಸಿಬ್ಬಂದಿಗಳ ಕೊರತೆ ಮತ್ತು ವ್ಯವಸ್ಥೆಗಳ ಕಂಪ್ಯೂಟರೀಕರಣದ ಅಲಭ್ಯತೆಯ

ಕಾರಣದಿಂದ ಸರ್ವಶಿಕ್ಷಾ ಅಭಿಯಾನ್ (ಎಸ್.ಎಸ್.ಎ) ಗೆ ಹಣದ ಹರಿವು ವಿಳಂಬವಾಯಿತು ಎಂದು RTE ಅಭಿಪ್ರಾಯ ಪಟ್ಟಿದೆ. ಮೀಸಲಿಟ್ಟ ಬಜೆಟಿನಲ್ಲಿ ದೊಡ್ಡ ಮೊತ್ತ ನವೋದಯ ವಿದ್ಯಾಲಯ, ಸರ್ವೋದಯ ವಿದ್ಯಾಲಯ ಮತ್ತು ಕೇಂದ್ರೀಯ ವಿದ್ಯಾಲಯದಂತಹ ಶಾಲೆಗಳಿಗೆ ಮೀಸಡಲಾಗಿದೆ. ಮೊದಲ ಎರಡನ್ನು ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಮಾದರಿ ಶಾಲೆಗಳಾಗಿ ಸ್ಥಾಪಿಸಲಾಯಿತು. ಕೇಂದ್ರೀಯ ವಿದ್ಯಾಲಯ ಕೇಂದ್ರ ಸರಕಾರೀ ನೌಕರರ ಮಕ್ಕಳ ಅಗತ್ಯಗಳನ್ನು ಪೂರೈಸುತ್ತದೆ. ಈ ಶಾಲೆಗಳಲ್ಲಿ ಪ್ರತಿ ಮಗುವಿನ ವೆಚ್ಚವು ಇತರ ಶಾಲೆಗಳಿಗಿಂತ ತುಂಬಾ ಹೆಚ್ಚಾಗಿದೆ. ಅವರ ವಿಭಿನ್ನ ಸ್ಥಾನಮಾನಗಳ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳನ್ನು ವಿಭಿನ್ನವಾಗಿ ಪರಿಗಣಿಸುವ ಶ್ರೇಣೀಕೃತ ಶಿಕ್ಷಣ ವ್ಯವಸ್ಥೆಯನ್ನು ಇದು ಕಾನೂನುಬದ್ಧಗೊಳಿಸಿದೆ.

ಶಿಕ್ಷಕ ಸಮುದಾಯದ ವೃತ್ತಿಪರ ನೈತಿಕತೆಯಷ್ಟೇ ಎಂದಿಗಿಂತ ಕಡಿಮೆಯಾಗಿರುವುದಷ್ಟೇ ಅಲ್ಲ ಜೊತೆಗೆ ಬೋಧನಾ ವರ್ಗದ ಸಂಖ್ಯಾಪ್ರಮಾಣದಲ್ಲಿ ಗಮನಾರ್ಹ ಕೊರತೆಯೂ ಇದೆ. ಸಾಕಷ್ಟು ಶಾಲೆಗಳಲ್ಲಿ ಈಗಲೂ ಒಬ್ಬ ಶಿಕ್ಷಕರಷ್ಟೇ ಇದ್ದು ಅದು ಪಿ.ಟಿ.ಆರ್. ಮೇಲೆ ನಕಾರಾತ್ಮಕ ಪರಿಣಾಮ ಬೀರುತ್ತಿದೆ.

ಶಿಕ್ಷಕರ ನೇಮಕಾತಿ ಮತ್ತು ನಿಯೋಜನೆಯಲ್ಲಿ ವಿಳಂಬವಾಗುತ್ತಿದೆ. ಬಹುತೇಕವಾಗಿ ಅವರನ್ನು ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಲಾಗುತ್ತದೆ. ಐದು ಲಕ್ಷಕ್ಕಿಂತ ಹೆಚ್ಚು ಶಿಕ್ಷಕರು RTE ಮಾನದಂಡಗಳ ಪ್ರಕಾರ ಕಡಿಮೆ ಅರ್ಹತೆ ಹೊಂದಿದ್ದಾರೆ. ಈ ಕಡಿಮೆ ಅರ್ಹತೆ ಇರುವ ಶಿಕ್ಷಕರು ಉತ್ತರ ಪ್ರದೇಶ, ಬಿಹಾರ, ಪಶ್ಚಿಮ ಬಂಗಾಳ, ಅಸ್ಸಾಮ್, ಒರಿಸ್ಸಾ, ಚತ್ತಿಸಗಢ, ಮಧ್ಯ ಪ್ರದೇಶ ದಂತಹ ಕಡಿಮೆ ಕಾರ್ಯಕ್ಷಮತೆಯ ರಾಜ್ಯಗಳಲ್ಲಿ ಕೇಂದ್ರೀಕೃತವಾಗಿದ್ದಾರೆ. ಅವರ ಸೇವಾ ಪರಿಸ್ಥಿತಿಗಳು ಕಳಪೆಯಾಗಿವೆ. ಮತ್ತು ಅವರ ಸಂಬಳವು ಆಗಾಗ ವಿಳಂಬವಾಗುತ್ತಿರುತ್ತದೆ. ಜೊತೆಗೆ ಶಾಲಾ ಸಮಯದ ನಂತರ ಅವರನ್ನು ಆಡಳಿತಾತ್ಮಕ ಕೆಲಸಗಳಿಗೂ ಬಳಸಿಕೊಳ್ಳಲಾಗುತ್ತದೆ. ಇದರ ಪರಿಣಾಮ ತರಗತಿಯಲ್ಲಿ ಮಕ್ಕಳೊಂದಿಗೆ ಅವರು ಕಳೆಯಬೇಕಾದ ಅಮೂಲ್ಯ ಸಮಯ ಕಳೆದುಹೋಗುತ್ತದೆ.

RTE ಕಾಯಿದೆ ಬಂದ ಏಳು ವರುಷಗಳ ನಂತರ 9.4 ಲಕ್ಷ ನುರಿತ ಶಿಕ್ಷಕರ ಕೊರತೆ ಸರಕಾರಿ ಶಾಲೆಗಳಲ್ಲಿದೆ (5.86 ಲಕ್ಷ ಪ್ರಾಥಮಿಕ ಮತ್ತು 3.5 ಲಕ್ಷ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ). ಸುಮಾರು 8.3% (96000) ಪ್ರಾಥಮಿಕ ಶಾಲೆಗಳಲ್ಲಿ ಕೇವಲ ಒಬ್ಬ

ಶಿಕ್ಷಕರಿದ್ದಾರೆ. ssa 2012-13 ರವರೆಗೆ 19.8 ಲಕ್ಷ ಬೋಧಕ ಹುದ್ದೆಗಳನ್ನು ಮಂಜೂರು ಮಾಡಿದ್ದರೂ 2014 ರ ಹೊತ್ತಿಗೆ ಕೇವಲ 15 ಲಕ್ಷ ಶಿಕ್ಷಕರನ್ನು ಮಾತ್ರ ನೇಮಿಸಿಕೊಳ್ಳಲಾಗಿದೆ. ಶಿಕ್ಷಕರ ನೇಮಕಾತಿ ಪ್ರಕ್ರಿಯೆಯು ಸಮಯ ತೆಗೆದುಕೊಳ್ಳುತ್ತದೆ ಮತ್ತು ನ್ಯಾಯಾಲಯಗಳಲ್ಲಿನ ದಾವೆಗಳು ಆಗಾಗ ನೇಮಕಾತಿ ಪ್ರಕ್ರಿಯೆಯನ್ನು ತಡೆ ಹಿಡಿಯುತ್ತವೆ. DSE (2015-16) ಪ್ರಕಾರ ಕೇವಲ 80.31% ಶಿಕ್ಷಕರು ವೃತ್ತಿಪರವಾಗಿ ತರಬೇತಿ ಪಡೆದಿದ್ದಾರೆ. ಯಾವ ಕಾರಣಕ್ಕಾಗಿ RTE ಯನ್ನು ಅನುಷ್ಠಾನಕ್ಕೆ ತರಲಾಗಿತ್ತೋ ಅದರ ಮೂಲ ಉದ್ದೇಶಕ್ಕೆ ಅಡ್ಡಿಯಾಗಿರುವುದು ಇದೇ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ.

**ಖಾಸಗಿ ವಿನಾಯಿತಿ**

ಖಾಸಗಿ ಶಾಲೆಗಳ ವಸೀಲಿಬಾಜಿ ಮೊದಲಿನಿಂದಲೂ ತನ್ನ ಸ್ವಂತ ಹಿತಾಸಕ್ತಿಯನ್ನು ರಕ್ಷಿಸುವಲ್ಲಿ ಹೆಚ್ಚು ಆಸಕ್ತಿ ಹೊಂದಿದೆ. ಹಾಗಾಗಿ RTE ಯಿಂದ ವಿನಾಯಿತಿ ಕೋರಿದೆ. ಖಾಸಗಿ ಶಾಲೆಗಳಿಗೆ ಸಂಬಂಧಿಸಿದ ನಿಯಮಗಳು ಕೆಲವು ರಾಜ್ಯಗಳಲ್ಲಿ ಬಿಗಿಯಾಗಿದೆಯಾದರೂ ಖಾಸಗಿ ಶಾಲೆಗಳಲ್ಲಿ ಆರ್.ಟಿ.ಇ. ಮಾನದಂಡಗಳ ಪಾಲನೆಯನ್ನು ನಿಯಂತ್ರಿಸುವ ಯಾವುದೇ ರಾಷ್ಟ್ರೀಯ ಕಾರ್ಯ ವಿಧಾನಗಳಿಲ್ಲ. ಖಾಸಗಿ ಶಾಲೆಗಳಲ್ಲಿ ಆರ್ಥಿಕವಾಗಿ ದುರ್ಬಲ ವರ್ಗಗಳ (EWS) ಮಕ್ಕಳಿಗೆ 25% ಸೀಟುಗಳ ಮೀಸಲಾತಿಯನ್ನು ಖಾಸಗಿ ಶಾಲೆಗಳು ತೀವ್ರವಾಗಿ ವಿರೋಧಿಸುತ್ತಿವೆ. ಅವರು ಆರ್.ಟಿ.ಇ ಕಾಯಿದೆಯಲ್ಲಿ ನಿಗದಿ ಪಡಿಸಿದ ಕನಿಷ್ಠ ಮೂಲ ಸೌಕರ್ಯ ಅಗತ್ಯಗಳಿಂದ ವಿನಾಯಿತಿಯನ್ನು ಬಯಸುತ್ತಿದ್ದಾರೆ. ಈ ನಿಯಮಗಳನ್ನು ಪಾಲಿಸದೆಯೂ ತಾವು ಬಡ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ನೀಡುತ್ತಿದ್ದೇವೆ ಎಂದು ಅವರು ವಾದಿಸುತ್ತಾರೆ.

ಭಾಷಾ ಮತ್ತು ಧಾರ್ಮಿಕ ಅಲ್ಪಸಂಖ್ಯಾತ ಸಂಸ್ಥೆಗಳು (ಅನುದಾನಿತ ಮತ್ತು ಅನುದಾನರಹಿತ) ತಮ್ಮ ಸಾಂವಿಧಾನಿಕ ಹಕ್ಕುಗಳ ಅಡಿಯಲ್ಲಿ ಆಶ್ರಯ ಪಡೆಯುವುದರ ಜೊತೆಗೆ ನ್ಯಾಯಾಲಯದ ತೀರ್ಪಿನ ಸಹಾಯದಿಂದ ಕಾಯಿದೆಯ ವ್ಯಾಪ್ತಿಯಿಂದ ಹೊರಗಿರುವಲ್ಲಿ ಯಶಸ್ವಿಯಾಗಿದ್ದಾರೆ. ಕಾಯಿದೆಗೆ ಸಂಬಂಧಿಸಿದ ಅತಿ ಹೆಚ್ಚು ದಾವೆಗಳು ಕಾನೂನನ್ನು ಜಾರಿಗೊಳಿಸಬೇಕು ಎಂಬುದರ ಬದಲಾಗಿ ಅದರ ವಿರುದ್ಧವೇ ಇದೆ ಎಂಬ

ಆಪಾದನೆಯಿದೆ.

ಈ ಕಾಯಿದೆಯು ಪೋಷಕರು ಮತ್ತು ಸಮುದಾಯವನ್ನು ತಮ್ಮ ಮಕ್ಕಳ ಶಿಕ್ಷಣದಲ್ಲಿ ಪ್ರಮುಖ ಪಾಲುದಾರರೆಂದು ಗುರುತಿಸುತ್ತದೆ ಮತ್ತು ಅವರಿಗೆ ಕೆಲವು ಅಧಿಕಾರಗಳನ್ನು ನೀಡಿದೆ. ಅದರ ಮೊದಲ ಹಂತ SMC ರಚನೆ. ಹಾಗಿದ್ದೂ SMC ಯ ಸಂವಿಧಾನ ಹಲವಾರು ಸಮಸ್ಯೆಗಳಿಂದ ಕೂಡಿದೆ. - ತಿಳುವಳಿಕೆಯ ಕೊರತೆ, ತಮ್ಮ ಪಾತ್ರದ ಕುರಿತು ಸ್ಪಷ್ಟತೆ ಇಲ್ಲದಿರುವುದು, ನಿಧಿಯ ಕೊರತೆ, ಶಾಲಾ ಅಭಿವೃದ್ಧಿ ಯೋಜನೆಗಳನ್ನು ಸಿದ್ಧಪಡಿಸುವ ಸಾಮರ್ಥ್ಯ ಮತ್ತು ತರಬೇತಿಯ ಕೊರತೆ ಮತ್ತು ಮುಖ್ಯವಾಗಿ ಸ್ವಾಯತ್ತತೆಯ ಕೊರತೆ ಹಾಗೂ ಶಾಲೆಯ ಅಧಿಕಾರಿಗಳನ್ನು ಪ್ರಶ್ನಿಸುವ ಸಾಮರ್ಥ್ಯ ಇಲ್ಲದಿರುವುದು.

2015-16ರಲ್ಲಿ ಎಲ್ಲಾ ರಾಜ್ಯಗಳು, 95% ಶಾಲೆಗಳಲ್ಲಿ SMC ಅಸ್ತಿತ್ವದಲ್ಲಿರುವುದಾಗಿ ವರದಿ ಮಾಡಿವೆ . ಆದರೆ ಅವುಗಳಲ್ಲಿ ಹೆಚ್ಚಿನವು ಕೇವಲ ಕಾಗದದ ಮೇಲೆ ಅಸ್ತಿತ್ವದಲ್ಲಿದೆ ಎಂಬ ಆರೋಪವಿದೆ. ಎಲ್ಲೆಲ್ಲಿ ಅಸ್ತಿತ್ವದಲ್ಲಿದೆಯೋ ಅಲ್ಲಿ SDPಗಳನ್ನು ತಯಾರಿಸದೇ ಇರುವುದರಿಂದ ಶಾಲೆಗೆ ಬೇಕಾದ ಅನುದಾನ ದೊರೆಯದೇ ಹೋಯಿತು. ಭಾರತದಾದ್ಯಂತ ಪೋಷಕರ ಯಾವುದೇ ಏಕರೂಪದ ಸಂಘಟನೆ ಇಲ್ಲದ ಕಾರಣ, ಶಾಲೆಗಳ ಕಾರ್ಯನಿರ್ವಹಣೆಯ ಮೇಲೆ ಪರಿಣಾಮ ಬೀರುವ ಅವರ ಸ್ಥಾನ ಮತ್ತು ಸಾಮರ್ಥ್ಯವು ಸಮಾಜದಲ್ಲಿ ಅವರಿಗಿರುವ ಸ್ಥಾನಮಾನದ ಮೇಲೆ ಅವಲಂಬಿತವಾಗಿದೆ. ಎಲ್ಲ ಪೋಷಕರನ್ನು ಒಂದೇ ದೃಷ್ಟಿಯಲ್ಲಿ ನೋಡುವುದು ಹಾಗೂ smcಗಳ ರಚನೆಯನ್ನು ಸಬಲೀಕರಣದ ಸಂಕೇತವೆಂದು ಪರಿಗಣಿಸುವುದು ವಾಸ್ತವಿಕವೆನಿಸಲಾರದು.

ಮಕ್ಕಳನ್ನು ಅನುತ್ತೀರ್ಣ ಮಾಡುವುದು ಕಲಿಕೆಗೆ ಉತ್ತೇಜನ ನೀಡುತ್ತದೆ ಎಂಬ ನಂಬಿಕೆಗೆ ಅನುಗುಣವಾಗಿ. ಕೇಂದ್ರ ಸರ್ಕಾರ ಮತ್ತು ರಾಜ್ಯಗಳು RTEಯ ಅತ್ಯಂತ ಪ್ರಗತಿಪರ ನಿಬಂಧನೆಗಳಲ್ಲಿ ಒಂದಾದ ಅನುತ್ತೀರ್ಣ ರಹಿತ ನೀತಿಯನ್ನು (NDP) ತೆಗೆದು ಹಾಕಿವೆ. ಈ ನೀತಿಯ ಪ್ರಕಾರ ಎಂಟನೇ ತರಗತಿಯವರೆಗೆ ಮಕ್ಕಳನ್ನು ನಪಾಸು ಮಾಡುವಂತಿರಲಿಲ್ಲ. (ಈ ನೀತಿಯನ್ನು ಈಗ ಐದನೇ ತರಗತಿಯವರೆಗೆ ಎಂದು ಮರುರೂಪಿಸಲಾಗಿದೆ). ಈ ನಿಬಂಧನೆಯು ಮಕ್ಕಳ ಮೌಲ್ಯಮಾಪನ ನಡೆಸದೇ ಮುಂದಿನ ತರಗತಿಗೆ ತೇರ್ಗಡೆ ಮಾಡಲಾಗುತ್ತದೆ ಹಾಗೂ ಇದರ ಪರಿಣಾಮ ಮಕ್ಕಳು ಕಲಿಯುವುದಿಲ್ಲ ಎಂದು ತಪ್ಪಾಗಿ ಅರ್ಥೈಸಲಾಗಿತ್ತು. ಮಕ್ಕಳನ್ನು ತೇರ್ಗಡೆ ಮಾಡದೇ ಅದೇ ತರಗತಿಯಲ್ಲಿ ಕೂರಿಸಬೇಕು ಎಂಬುದರ ಕಲ್ಪನೆ, ಮಕ್ಕಳಿಗೆ ಕನಿಷ್ಠ ಎಂಟು ವರುಷ ಒತ್ತಡ ರಹಿತ ಶಿಕ್ಷಣ ಸಿಗಬೇಕೆಂಬ

ಕಾಯಿದೆಯ ದೃಷ್ಟಿಕೋನಕ್ಕೆ ಸಂಪೂರ್ಣ ವಿರುದ್ಧವಾಗಿದೆ. ಮಕ್ಕಳನ್ನು ಪಾಸು-ಫೇಲು ಎಂದು ತರಗತಿಯಲ್ಲಿಯೇ ಉಳಿಸಿಕೊಳ್ಳುವ ನೀತಿಯು ತುಂಬಾ ಹಾನಿಕಾರಕವಾದದ್ದು ಮತ್ತು ಇದು ಮಕ್ಕಳನ್ನು ಶಿಕ್ಷಣ ವ್ಯವಸ್ಥೆಯಿಂದ ಹೊರಗೆ ತಳ್ಳುತ್ತದೆ ಎಂದು ಸಂಶೋಧನೆಗಳು ಹೇಳುತ್ತವೆ. ಗಾಯಕ್ಕೆ ಉಪ್ಪು ಸವರಿದಂತೆ ಬೋರ್ಡ್ ಪರೀಕ್ಷೆಗಳು ಈಗ ಐದನೇ ತರಗತಿಯಿಂದಲೇ ಪ್ರತೀಕಾರ ತೀರಿಸಿಕೊಳ್ಳಲು ಬಂದಿವೆ.

ಕಳೆದ ಕೆಲವು ವರುಷಗಳಿಂದ ಸರಕಾರಿ ಶಾಲೆಗಳಲ್ಲಿ ದಾಖಲಾತಿ ಕಡಿಮೆಯಾಗುತ್ತಿರುವ ಸಮಸ್ಯೆಯ ಜೊತೆಗೆ ಕೆಲವು ರಾಜ್ಯಗಳಲ್ಲಿ ಶಾಲೆಗಳನ್ನು ಸಾಮೂಹಿಕವಾಗಿ ಮುಚ್ಚಲಾಗಿದೆ. ರಾಜಸ್ತಾನ ಸರ್ಕಾರ ಸುಮಾರು 18000 ಶಾಲೆಗಳನ್ನು ಮುಚ್ಚಿದೆ ಅಥವಾ ವಿಲೀನಗೊಳಿಸಲಾಗಿದೆ. ಮಹಾರಾಷ್ಟ್ರದಲ್ಲಿ 2014 ರಲ್ಲಿ ಈ ಸಂಖ್ಯೆ 13000. ಭೂ ಮಾಫಿಯಾದ ಕಾರಣದಿಂದ ನಗರ ಪ್ರದೇಶಗಳಲ್ಲೂ ಸರಕಾರೀ ಶಾಲೆಗಳನ್ನು- ಸಾಕಷ್ಟು ವಿದ್ಯಾರ್ಥಿಗಳಿದ್ದರೂ- ಮುಚ್ಚಲಾಯಿತು. ಶಾಲೆಗಳಿದ್ದ ಜಾಗದ ಬೆಲೆಯಲ್ಲಿ ಏರಿಕೆ ಕಂಡು ಬಂದ ಕಾರಣ ಭೂ ಮಾಫಿಯಾ ಭೂಮಿಯನ್ನು ಕಬಳಿಸ ಬಯಸಿತ್ತು. (RTE Forum 2016-17).

ತೆಲಂಗಾಣದಲ್ಲಿ ಶೂನ್ಯ ದಾಖಲಾತಿಯ ಅಥವಾ 20ಕ್ಕಿಂತ ಕಡಿಮೆ ವಿದ್ಯಾರ್ಥಿಗಳನ್ನು ಹೊಂದಿರುವ ಶಾಲೆಗಳನ್ನು ಮುಚ್ಚಲಾಗಿದೆ ಎಂದು ಇತ್ತೀಚಿನ ಅಧ್ಯಯನ ವರದಿ ಮಾಡಿದೆ. ಇದರ ಪರಿಣಾಮ ಜನವರಿ 2016 ರ ವೇಳೆಗೆ 458 ಸರಕಾರಿ ಶಾಲೆಗಳನ್ನು ಮುಚ್ಚಲಾಯಿತು. ಒರಿಸ್ಸಾ ಸರಕಾರ ಐದು ಅಥವಾ ಅದಕ್ಕಿಂತ ಕಡಿಮೆ ಮಕ್ಕಳಿರುವ 165 ಶಾಲೆಗಳನ್ನು ಮುಚ್ಚಿದೆ. ಎರಡನೇ ಹಂತದಲ್ಲಿ 10 ಅಥವಾ ಅದಕ್ಕಿಂತ ಕಡಿಮೆ ಮಕ್ಕಳಿರುವ ಶಾಲೆಗಳನ್ನು ಮುಚ್ಚಲು ಯೋಚಿಸುತ್ತಿದೆ. ದಾಖಲಾತಿ ಮಾನದಂಡಗಳನ್ನು ಕಟ್ಟು ನಿಟ್ಟಾಗಿ ಪಾಲಿಸದೇ ಒಡಿಸಾ ಮತ್ತು ರಾಜಸ್ತಾನದಂತಹ ಕೆಲವು ಸ್ಥಳಗಳಲ್ಲಿ ಹಲವು ಶಾಲೆಗಳನ್ನು ಮನಸೋ ಇಚ್ಛೆ ಮುಚ್ಚಲಾಯಿತು. ಇದು ಹೆಚ್ಚಿನ ಸಂಖ್ಯೆಯ ಹೆಣ್ಣು ಮಕ್ಕಳು ಮತ್ತು ಬಡ ವಿದ್ಯಾರ್ಥಿಗಳ ಮೇಲೆ ಪರಿಣಾಮ ಬೀರಿತು. (ರಾವ್ ಮತ್ತು ಇತರರು, 2017). ನೀತಿಯೊಂದನ್ನು ವಿವೇಚನೆ ಇಲ್ಲದೇ ಬಳಸಿದಾಗ ಸಾಕಷ್ಟು ಮಕ್ಕಳು ಶಾಲೆ ಬಿಡುವ ಪರಿಸ್ಥಿತಿ ಎದುರಾಗುವುದರ ಜೊತೆಗೆ, ಮಿತವ್ಯಯದ ಖಾಸಗಿ ಶಾಲೆಗಳು ಪ್ರಾರಂಭವಾಗಿ ಅವರು ಕಡಿಮೆ ಸಂಬಳದಲ್ಲಿ ಕಡಿಮೆ ದರ್ಜೆಯ ಬೋಧಕರನ್ನು ಕರಾರಿನ ಮೇಲೆ ನೇಮಿಸಿಕೊಳ್ಳುವ ಪರಿಣಾಮ ಬಡ ಮಕ್ಕಳ ಶಿಕ್ಷಣದ ಗುಣಮಟ್ಟ ಇನ್ನಷ್ಟು ಛಿದ್ರಗೊಳ್ಳುತ್ತದೆ.

1990ರ ದಶಕದ ಆರಂಭದಲ್ಲಿ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣಕ್ಕೆ ತನ್ನನ್ನು ತಾನು ತೆರೆದುಕೊಂಡ ಭಾರತೀಯ ಪ್ರಭುತ್ವವು, ಕಾಯಿದೆಯ ಕೇಂದ್ರ ಸಿದ್ಧಾಂತಕ್ಕೆ ವಿರುದ್ಧವಾಗಿ, ಸಾಮಾಜಿಕ ವಲಯದಲ್ಲಿ ತನ್ನ ಜವಾಬ್ದಾರಿಯನ್ನು ಕಡಿಮೆ ಮಾಡಿಕೊಳ್ಳುವುದನ್ನು ಮುಂದುವರೆಸಿ ಪಾಲುದಾರಿಕೆಗೆ ಖಾಸಗಿ ವಸೀಲಿಬಾಜಿಯನ್ನು ಆಹ್ವಾನಿಸುತ್ತದೆ. ಕೆಲವು ರಾಜ್ಯಗಳು ಸರಕಾರೀ-ಖಾಸಗಿ ಸಹಭಾಗಿತ್ವವನ್ನು ಪ್ರಾರಂಭಿಸಿವೆ. ಅಲ್ಲಿ ಸಾರ್ವಜನಿಕ ಶಾಲೆಯ ನಿರ್ವಹಣೆಯನ್ನು ಖಾಸಗಿಯವರಿಗೆ ಹಸ್ತಾಂತರಿಸಲಾಗುತ್ತದೆ. ತರುವಾಯ, ಹೆಚ್ಚಿನ ಶಿಕ್ಷಕರು ಖಾಸಗಿ ವಲಯಕ್ಕೆ ತೆರಳಿ ಸರಕಾರೀ ಶಾಲಾ ಶಿಕ್ಷಕರ ನೇಮಕಾತಿಯಲ್ಲಿ ಇಳಿಕೆ ಕಂಡು ಬಂದಿದೆ. ಪ್ರಸ್ತುತ ಬಡ ಮಕ್ಕಳು ಸರಕಾರೀ ಶಾಲೆಗಳ ಬಗ್ಗೆ ಭ್ರಮ ನಿರಸನಗೊಂಡಿದ್ದಾರೆ ಮತ್ತು ಅವುಗಳಲ್ಲಿ ಮುಂದುವರೆಯಲು ಬಯಸುವುದಿಲ್ಲ, ಬದಲಿಗೆ ಕಡಿಮೆ ದರದ ಖಾಸಗಿ ಶಾಲೆಗಳು ಬಡ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ಒದಗಿಸುತ್ತವೆ ಎಂದು ಬಿಂಬಿಸಲಾಗಿದೆ. ಆದರ ಶಿಕ್ಷಣ ಕ್ಷೇತ್ರದ ಸಂಶೋಧಕರು ಈ ಪ್ರತಿಪಾದನೆಯನ್ನು ತೀವ್ರವಾಗಿ ವಿರೋಧಿಸುತ್ತ ಬಂದಿದ್ದಾರೆ. ಇತ್ತೀಚೆಗೆ ಆಂಧ್ರಪ್ರದೇಶದ ಉದ್ದಕ್ಕೂ ಅಜೀಮ್ ಪ್ರೇಮ್ಜಿ ಫೌಂಡೇಶನ್ ನಡೆಸಿದ ಅಧ್ಯಯನದ ಪ್ರಕಾರ, ಸಾಮಾನ್ಯ ಗ್ರಹಿಕೆಗೆ ತದ್ವಿರುದ್ಧವಾಗಿ, ಶುಲ್ಕ ಪಡೆಯುವ ಖಾಸಗಿ ಶಾಲೆಗಳು, ಸರಕಾರೀ ಶಾಲೆಗಳಿಗೆ ಹೋಲಿಸಿದಾಗ ಅನಾನುಕೂಲಿತ ಸಮುದಾಯದ ಮಕ್ಕಳಿಗೆ ಉತ್ತಮ ಶಿಕ್ಷಣ ನೀಡುವಲ್ಲಿ ವಿಫಲವಾಗಿವೆ.

ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವ ಜವಾಬ್ದಾರಿಯನ್ನು ಖಾಸಗಿ ವಲಯವು ವಹಿಸಿಕೊಳ್ಳಬಹುದು ಅಥವಾ ಕಾನೂನಾತ್ಮಕವಾಗಿ ಜವಾಬ್ದಾರರಾಗಬಹುದು ಎಂದು ನಂಬುವುದು ಅವಾಸ್ತವಿಕವಾಗಿದೆ. ಎಲ್ಲೆಲ್ಲಿ ಶಿಕ್ಷಣ ಸಾರ್ವತ್ರೀಕರಣಗೊಂಡಿದೆಯೋ ಅಲ್ಲೆಲ್ಲ ಸಾರ್ವಜನಿಕವಾಗಿ ಅನುದಾನಿತ ಮತ್ತು ಸರಕಾರಿ ಶಾಲೆಗಳಿಂದ (1990 ಹಸಿರು) ಇದು ಸಾಧ್ಯವಾಗಿದೆಯೇ ಹೊರತು ಲಾಭ ಮಾಡುವ ಖಾಸಗಿ ಅಥವಾ ಲೋಕೋಪಕಾರಿ ಉಪಕ್ರಮಗಳಿಂದ ಅಲ್ಲ.

**ಮುಂದೇನು?**

ಶಿಕ್ಷಣ ತಜ್ಞರು ಮತ್ತು ನಾಗರಿಕ ಸಮಾಜ ಸೇವಾ ಸಂಸ್ಥೆಗಳು ಕಳೆದೆರಡು ವರುಷಗಳಿಂದ

ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲು ಏನೇನು ಆಗಬೇಕೆಂದು ಗಟ್ಟಿಯಾಗಿ ಕೂಗುತ್ತಿರುವ ಹಾಗೆ ನಾನು ಈ ಲೇಖನವನ್ನು ಶಿಫಾರಸ್ಸುಗಳೊಂದಿಗೆ ಮುಗಿಸುವುದಿಲ್ಲ. ಕಾಯಿದೆಯ ಅನುಷ್ಠಾನದ ಸುತ್ತಲಿನ ಸವಾಲುಗಳನ್ನು ಗುರುತಿಸಿ ನಿರ್ಮೂಲನ ಮಾಡುವುದಕ್ಕೆ ಹೆಚ್ಚಿನ ಬ್ರಹ್ಮವಿದ್ಯೆಯ ಅಗತ್ಯವಿಲ್ಲ. ಬೇಕಾಗಿರುವುದು ಬಲವಾದ ರಾಜಕೀಯ ಇಚ್ಛಾಶಕ್ತಿ, ಪರಿಣಾಮಕಾರಿ ತಲುಪಿಸುವಿಕೆ, ಮೇಲ್ವಿಚಾರಣಾ ಕಾರ್ಯವಿಧಾನಗಳು ಮತ್ತು ಬಹಳ ಮುಖ್ಯವಾಗಿ, ಸ್ಪಷ್ಟವಾಗಿ ಮೀಸಲಿಟ್ಟ ಆರ್ಥಿಕ ಸಂಪನ್ಮೂಲಗಳು. ಭಾರತೀಯ ಪ್ರಭುತ್ವವು ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಬೇಕು. ಮತ್ತು ಅದನ್ನು ಮತ್ತೊಬ್ಬರಿಗೆ ವರ್ಗಾಯಿಸಲಾಗದ ಮಕ್ಕಳ ಸಂಪೂರ್ಣ ಹಕ್ಕು ಎನ್ನುವುದನ್ನು ಮನಗಾಣಬೇಕು. ಹೆಚ್ಚುವರಿಯಾಗಿ, ಒಂದು ಬೃಹತ್ ಸಾರ್ವಜನಿಕ ಆಂದೋಲನವನ್ನು ಪ್ರಾರಂಭಿಸುವ ಮೂಲಕ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಬಲಪಡಿಸುವುದು (ಬದಲಾಯಿಸುವುದಲ್ಲ). ಹಾಗೂ ಸಂವಿಧಾನವು ಸೂಚಿಸಿದ ಕಾಲಮಿತಿಯೊಳಗೆ ಈ ಕಾಯಿದೆಯನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನೂ ಒಡೆತನವನ್ನೂ ರಾಜ್ಯ ತೆಗೆದುಕೊಳ್ಳಬೇಕು ಎಂದು ಒತ್ತಾಯಿಸುವುದು ಬಹುಶಃ ಅಗತ್ಯವಾಗಬಹುದು.

**ಟಿಪ್ಪಣಿ:**

ಶಿಕ್ಷಣ ಹಕ್ಕು ವೇದಿಕೆಯು ಸರ್ಕಾರೇತರ ಸಂಸ್ಥೆಗಳು (NGO), ಅಂತಾರಾಷ್ಟ್ರೀಯ ಸರ್ಕಾರೇತರ ಸಂಸ್ಥೆಗಳು (INGO), ಶಿಕ್ಷಕರು, ಶಿಕ್ಷಕರ ಸಂಘದ ಪ್ರತಿನಿಧಿಗಳು, ಶಿಕ್ಷಣ ತಜ್ಞರು, ಶಿಕ್ಷಣ ಮತ್ತು ಮಕ್ಕಳ ಹಕ್ಕುಗಳ ಸಂಸ್ಥೆಗಳು, ಆರ್.ಟಿ.ಇ. ಕಾಯಿದೆಯನ್ನು ಜಾರಿಗೊಳಿಸಿ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯನ್ನು ಬಲಪಡಿಸಲು ಹೋರಾಡುತ್ತಿರುವ ಹೋರಾಟಗರರ ಸಮೂಹವಾಗಿದೆ.

ಉಲ್ಲೇಖ:

ಭಾರತ ಸರ್ಕಾರ (1966): ಶಿಕ್ಷಣ ಆಯೋಗದ ವರದಿ (1964-66), ಶಿಕ್ಷಣ ಮತ್ತು ರಾಷ್ಟ್ರೀಯ ಅಭಿವೃದ್ಧಿ; ಶಿಕ್ಷಣ ಸಚಿವಾಲಯ, ನವದೆಹಲಿ.

ಗ್ರೀನ್, ಆಂಡಿ (1990): ಎಜುಕೇಶನ್ ಅಂಡ್ ಫಾರ್ಮೇಶನ್ : ದಿ ರೈಸ್ ಆಫ್ ನ್ಯಾಶನಲ್ ಎಜುಕೇಶನ್ ಸಿಸ್ಟಮ್ ಇನ್ ಇಂಗ್ಲೆಂಡ್ , ಫ್ರಾನ್ಸ್ ಅಂಡ್ ಯು.ಎಸ್.ಎ, ಹ್ಯಾಂಪಶೈರ್, ಪಾಲ್ ಗ್ರೇವ್ - ಮ್ಯಾಕ್ಮಿಲನ್ ಪ್ರೆಸ್

ಡಿ.ಐ.ಎಸ್.ಇ (2001): "ಅನಾಲಿಟಿಕಲ್ ರಿಪೋರ್ಟ್ಸ್" ಡಿ.ಐ.ಎಸ್.ಇ ಡೇಟಾ ಬೇಸ್. http://udise.in/AR.htm

ದೇಸಾಯಿ, ಸೋನಾಲ್ಡೆ, ಅಮರೇಶ್ ದುಬೆ, ಬ್ರಿಜಲ್ ಜೋಶಿ, ಮಿತಾಲಿ ಸೇನ್, ಅಬುಸಲೇಹ್ ಶರೀಫ್, ಮತ್ತು ರೀವ್ ದಿ ಒನ್ನೆಮಾನ್ (2010). ಹ್ಯೂಮನ್ ಡೆವಲಪ್ಮೆಂಟ್ ರಿಪೋರ್ಟ್ : ಚಾಲೆಂಜಸ್ ಫಾರ್ ಸೊಸೈಟಿ ಇನ್ ಟ್ರಾನ್ಸಿಶನ್, ನ್ಯೂ ಡೆಲ್ಲಿ, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್.

ಕರೊಪಾಡಿ, ಡಿ ಡಿ (2016) "Do Private Schools Really Ensure Better Learning Outcomes for Children?" - Azim Premji Foundation, http://test.azimpremji-foundation.org/sites/default/files/DO%20private%20Schools%20Really%20Ensure%20Better%20Learning%20Outcomes%20for%20children2016Issue%20XXV.pdf

ನಂದಾ ಪ್ರಶಾಂತ್ ಕೆ. " 87000 ಕೋಟಿ ರೂ ಶಿಕ್ಷಣ ನಿಧಿಯನ್ನು ರಾಜ್ಯಗಳು ಬಳಸಿಕೊಂಡಿಲ್ಲ, ಸಿ.ಎ.ಜಿ ಹೇಳಿಕೆ" 22 ಜುಲೈ ಲೈವ್ ಮಿಂಟ್ , http://www.livemint.com/politics/zawzUaawjG9bTJrldX9gIK/Rs87000-crore-of-right-to-education-funds-unused-by-states-.html

ರಾವ್ , ಎಸ್.ಎಸ್ ಗಂಗೂಲಿ , ಜೆ. ಸಿಂಗ್ , ಆರ್. ಆರ್. ಡಾಶ್ (2017) : ಶಾಲೆಗಳ ಮುಚ್ಚುವಿಕೆ ಮತ್ತು ವಿಲೀನ - ನೀತಿಯ ಬಹುರಾಜ್ಯ ಅಧ್ಯಯನ ಮತ್ತು ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಮೇಲೆ ಅದರ ಪರಿಣಾಮ ತೆಲಂಗಾಣ, ಒಡಿಶಾ ಮತ್ತು ರಾಜಸ್ತಾನ, ನವದೆಹಲಿ: ಮಕ್ಕಳನ್ನು ಉಳಿಸಿ.

ದಿ ಗೆಜೆಟ್ ಆಫ್ ಇಂಡಿಯಾ (2009): "ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ ಮಕ್ಕಳ ಹಕ್ಕು ಕಾಯಿದೆ, 2009" 27 ಆಗಸ್ಟ್, ನವದೆಹಲಿ, ಕಾನೂನು ಮತ್ತು ನ್ಯಾಯ ಸಚಿವಾಲಯ http://eoc.du.ac.in/RTE%20%notified.pdf

RtE ಫೋರಂ (2016-17): " ಮಕ್ಕಳ ಉಚಿತ ಮತ್ತು ಕಡ್ಡಾಯ ಶಿಕ್ಷಣದ ಹಕ್ಕುಗಳ ಅನುಷ್ಠಾನದ ಕರಡು ವರದಿ, 2009" 2016-17, RtE ಫೋರಂ, ನವದೆಹಲಿ.